# ಪ್ರಕೃತಿಯನ್ನೇ ಗುರುವಾಗಿಸಿಕೊಂಡು..

ಪ್ರೀತಿ ರಾವ್

ನನ್ನ ಕಥೆಯು ಚಿಕ್ಕದಾಗಿಯೇ ಶುರುವಾಗುತ್ತದೆ. ೮೦ ರ ದಶಕದಲ್ಲಿ ಯಾವುದೇ ಸಾಮಾನ್ಯ ಹುಡುಗಿಯಂತೆ ಬೆಳೆದ ನಾನು ಬೆಂಗಳೂರಿನ ಪ್ರತಿಯೊಂದನ್ನೂ, ಇಲ್ಲಿಯ ಹವಾಮಾನ, ಇಲ್ಲಿಯ ಜನ ಮತ್ತು ಸಂಸ್ಕೃತಿಯನ್ನು ಪ್ರೀತಿಸುತ್ತಿದ್ದೆ. ನಾನು ಸದಾ ವಾಯುಪಡೆಯ ಪೈಲಟ್ ಆಗಬೇಕೆಂದು ಕನಸು ಕಾಣುತ್ತಿದ್ದೆ. ನಾನು ನನ್ನ ಕನಸನ್ನು ನನಸಾಗಿಸಿಕೊಳ್ಳುವ ಸನಿಹಕ್ಕೂ ತಲಪಿದೆ ಆದರೆ ಸ್ವಲ್ಪದರಲ್ಲಿಯೇ ತಪ್ಪಿ ಹೋಯಿತು. ನನ್ನ ಆಕಾಂಕ್ಷೆಗಳನ್ನು ಬಿಟ್ಟುಬಿಡಬೇಕಾಗಿ ಬಂದ ನಾನು ಇಷ್ಟವಿಲ್ಲದೆ ಅಧ್ಯಯನವನ್ನು ಮುಂದುವರಿಸಿದೆ ಮತ್ತು ಎಂಬಿಎ ಪೂರ್ಣಗೊಳಿಸುವುದರಲ್ಲಿ ಯಶಸ್ವಿಯಾದೆ. ಜೀವನವೂ ತಿರುವು ಪಡೆಯಿತು. ನಾನು ಉತ್ತಮ ವೃತ್ತಿಜೀವನವನ್ನು ಹೊಂದಿದ್ದರೂ, ಕಾರ್ಪೊರೇಟ್ ಸಂಸ್ಥೆಗಳಿಗಾಗಿ ಕೆಲಸ ಮಾಡುವುದು ನಿರರ್ಥಕವೆನಿಸತೊಡಗಿತು. ಏನೋ ಸರಿಯಿಲ್ಲ ಅನಿಸತೊಡಗಿತು. ಮದುವೆಯಾದ ಅನಂತರ ನಾನು ಕೆಲಸ ಬಿಟ್ಟೆ. ಈ ನಿರ್ಧಾರವು ನನಗೆ ನನ್ನದೇ ಆದ ಸಮಯ ನೀಡಿತು. ನನ್ನ ಮಗುವಿನ ಜನನವು ಕ್ರಮೇಣ ನನ್ನ ದೃಷ್ಟಿಕೋನ ಮತ್ತು ಆಲೋಚನೆಯನ್ನು ಬದಲಾಯಿಸಿತು. ನಾವು ಸ್ವಲ್ಪಕಾಲ ವಿದೇಶದಲ್ಲಿದ್ದೆವು ಮತ್ತು ಜಗತ್ತು ಸುತ್ತಿದೆವು. ಈ ಅನುಭವ ಮತ್ತು ಯೋಗಭ್ಯಾಸ ಎರಡೂ ನನ್ನ ಮತ್ತು ಸುತ್ತಮುತ್ತಲಿನ ಪ್ರಪಂಚವನ್ನು ಅರ್ಥಮಾಡಿಕೊಳ್ಳಲು ನನಗೆ ಸಹಾಯ ಮಾಡಿದವು. ಅನಂತರ ಜೀವನಕ್ಕೆ ನಿರ್ಣಾಯಕ ತಿರುವು ಬಂತು. ನಾವು 2007 ರಲ್ಲಿ ಭಾರತಕ್ಕೆ ಹಿಂತಿರುಗಲು ನಿರ್ಧರಿಸಿದ್ದೆವು.

ಮರಳಿ ಬಂದ ಅನಂತರ, ಬಹುಶಃ ನಾನು ಮೊದಲು ಗಮನಿಸಿದ್ದು ಈ ಬೆಂಗಳೂರು ನಾನು ನೋಡಿದ ಬೆಂಗಳೂರು ಅಲ್ಲ ಎಂಬುದನ್ನು. ಬೆಂಗಳೂರಿನ ಭೂಪ್ರದೇಶವು ಗಮನಾರ್ಹವಾಗಿ ಬದಲಾಗಿತ್ತು. ಸಾಫ್ಟ್ ವೇರ್ ಮತ್ತು ಐಟಿ ಸೇವೆಗಳಿಗೆ ಜಾಗತಿಕ ಬೇಡಿಕೆಯ ಏರಿಕೆಯೊಂದಿಗೆ, ಬೆಂಗಳೂರು ಈಗಾಗಲೇ ಐಟಿಗಾಗಿ ಬೆಂಗಳೂರಿಗೆ ಹೋಗಿ ಎಂದು (ಗೋ-ಟು-ಸಿಟಿಯಾಗಿ) ವಿಶ್ವ ಭೂಪಟದಲ್ಲಿ ಗುರುತಿಸಲ್ಪಟ್ಟಿತ್ತು. ಸಹಜವಾಗಿ, ಇದು ಉತ್ತಮ ಜೀವನದ ಭರವಸೆಯೊಂದಿಗೆ ಭಾರತ ಮತ್ತು ಪ್ರಪಂಚದಾದ್ಯಂತ ಜನರನ್ನು ಆಕರ್ಷಿಸಿತು, ಆದರೆ ಅನಿಯಂತ್ರಿತ ಅಭಿವೃದ್ಧಿ ಮತ್ತು ಕಳಪೆ ತ್ಯಾಜ್ಯ ನಿರ್ವಹಣೆ ಅದನ್ನು ಸಂಪೂರ್ಣವಾಗಿ ಗುರುತಿಸಲಾಗದಂತೆ ಮಾಡಿತು.

ನಾನು ಆಳಕ್ಕೆ ಇಳಿದಂತೆ, ಅನೇಕ ವಿಷಯಗಳನ್ನು ಕಂಡುಕೊಂಡೆ. ಬೆಂಗಳೂರನ್ನು ಆವರಿಸಿದ್ದ ಮರಗಳು ಕಾಣೆಯಾಗಿದ್ದವು. ತಾಪಮಾನ ಮತ್ತು ಮಳೆಯ ಮಾದರಿಯು ಬದಲಾಗಿತ್ತು. ಕೆರೆಗಳು ಒಣಗಿ ಕಲುಷಿತಗೊಂಡಿದ್ದವು ಅಥವಾ ಅತಿಕ್ರಮಣಗೊಂಡಿದ್ದವು. ಗಾಳಿಯ ಗುಣಮಟ್ಟ ಹದಗೆಡುತ್ತಿತ್ತು. ಅನುಭೋಗೀಕರಣವು ಸಾರ್ವಕಾಲಿಕ ಉತ್ತುಂಗದಲ್ಲಿದ್ದು, ತ್ಯಾಜ್ಯ ನಿರ್ವಹಣೆ ಭಯಾನಕವಾಗಿತ್ತು ಮತ್ತು ನಾಗರಿಕ ಪ್ರಜ್ಞೆಯು ಕುಸಿಯುತ್ತಿತ್ತು. ಬೆಂಗಳೂರು ಭಾರತದ ಯಾವುದೇ ನಗರಕ್ಕಿಂತ ಅಥವಾ ಯಾವುದೇ ಅಭಿವೃದ್ಧಿಶೀಲ ರಾಷ್ಟ್ರದಲ್ಲಿ ಬೆಳೆಯುತ್ತಿರುವ ನಗರಕ್ಕಿಂತ ಭಿನ್ನವಾಗಿರಲಿಲ್ಲ.

ನಾನು ಯೋಚಿಸಲು ಪ್ರಾರಂಭಿಸಿದೆ: ಭವಿಷ್ಯದ ಪೀಳಿಗೆಗೆ ನಾವು ಬಿಟ್ಟು ಹೋಗುತ್ತಿರುವುದು ಇದನ್ನೇ? ನಮ್ಮ ಕ್ರಮಗಳು ಸಮರ್ಥನೀಯ ಮತ್ತು ಸುಸ್ಥಿರವಾಗಿವೆಯೇ? ನಾವು ಹಾನಿಯನ್ನು ಕಡಮೆ ಮಾಡಬಹುದೇ ಅಥವಾ ಹಿಮ್ಮುಖವಾಗಿಸಬಹುದೇ? ಒಬ್ಬ ವ್ಯಕ್ತಿಯಾಗಿ ನಾನು ಏನು ಮಾಡಬಹುದು? ಉತ್ತರಕ್ಕಾಗಿ ನಾನು ನನ್ನೊಳಗೆ ಹುಡುಕಾಡಿದೆ. ಹೆಚ್ಚು ಸುಸ್ಥಿರ ಜೀವನಶೈಲಿ? ಇದರಿಂದ ಪ್ರಕೃತಿಯ ಮೇಲಿನ ಹೊರೆ ಕಡಮೆಯಾಗುವುದಲ್ಲವೇ? ಅದು ಸಾವಿರಾರು ವರ್ಷಗಳ ಕಾಲ ಈ ಗ್ರಹದಲ್ಲಿ ವಾಸಿಸುತ್ತಿದ್ದ ಮನುಷ್ಯರ ಮಾರ್ಗವಾಗಿತ್ತಲ್ಲವೇ?



ನಾವು ಹಾಗೇ ಮಾಡಲು ಪ್ರಯತ್ನಿಸಿದೆವು. ನಮ್ಮ ಕುಟುಂಬದ ಸಹಾಯದಿಂದ, ನಾವು ಶೀಘ್ರದಲ್ಲೇ ನಮ್ಮ ತಾರಸಿಯಲ್ಲಿ ಗಿಡಮೂಲಿಕೆಗಳು ಮತ್ತು ತರಕಾರಿಗಳನ್ನು ಬೆಳೆಯಲು ಪ್ರಾರಂಭಿಸಿದೆವು. ಹಸಿಕಸವನ್ನು ಅಡುಗೆ ಅನಿಲವಾಗಿ ಪರಿವರ್ತಿಸುವ ಜೈವಿಕ ಅನಿಲ ಘಟಕವನ್ನು ಸ್ಥಾಪಿಸಿ ಗೊಬ್ಬರ ತಯಾರಿಸಲು ಪ್ರಾರಂಭಿಸಿದೆವು. ವಿದ್ಯುತ್ ಉತ್ಪಾದಿಸಲು ಸೌರ ಫಲಕಗಳನ್ನು ಅಳವಡಿಸಿದೆವು. ಮಳೆನೀರನ್ನು ಸಂಗ್ರಹಿಸಿದೆವು. ಜೈವಿಕ ಕಿಣ್ವಗಳ ಉಪಯೋಗವನ್ನು ಅರಿತೆವು ಮತ್ತು ಮನೆಯನ್ನು ಸ್ವಚ್ಛಗೊಳಸಿಲು ರಾಸಾಯನಿಕಗಳ ಬಳಕೆಯನ್ನು ನಿಲ್ಲಿಸಿದೆವು. ಈ ಸರಳ ಆಚರಣೆಗಳೊಂದಿಗೆ, ನಾವು ಮಾರುಕಟ್ಟೆಯ ಮೇಲಿನ ಅವಲಂಬನೆಯನ್ನು ಕಡಮೆಗೊಳಿಸಿಕೊಂಡದ್ದು ಮಾತ್ರವಲ್ಲದೆ ನಮ್ಮ ಇಂಗಾಲದ ಉತ್ಪಾದನೆಯ ಪ್ರಮಾಣವನ್ನೂ ತಗ್ಗಿಸಿದೆವು. ಪಯಣ ನಿರಂತರವಾದುದು ಆದರೆ ಸಾರ್ಥಕವಾದುದು. ನನ್ನ ಸೀಮಿತ ಯಶಸ್ಸಿನಿಂದ ಪ್ರೇರೇಪಿಸಲ್ಪಟ್ಟ ನಾನು ಇತರರಿಗೆ ಸುಸ್ಥಿರ ಜೀವನಶೈಲಿಯನ್ನು ನಡೆಸಲು ಸಹಾಯ ಮಾಡಬಹುದೇ ಎಂದು ಯೋಚಿಸಿದೆ. ಹೀಗಾಗಿ, ಸಾಯಿಲ್ ಆಂಡ್ ಸೋಲ್ ಹುಟ್ಟಿತು!

ಸಾಯಿಲ್ ಆಂಡ್ ಸೋಲ್ ನನ್ನನ್ನು ನಾನು ಅಭಿವ್ಯಕ್ತಪಡಿಸಿಕೊಳ್ಳಲು ವೇದಿಕೆಯನ್ನು ಒದಗಿಸಿತು. ಬಹು ಬೇಗನೆ, ನಾನು ಸಮುದಾಯಗಳು ಮತ್ತು ಕಾರ್ಪೋರೇಟ್ ಸಂಸ್ಥೆಗಳೊಡನೆ ತೊಡಗಿಸಿಕೊಳ್ಳಲು ಪ್ರಾರಂಭಿಸಿದೆ. ಅನೇಕ

ಪರಿಸರಸ್ನೇಹಿ ಉತ್ಪನ್ನಗಳು ಹುಟ್ಟಿಕೊಂಡವು. ನನ್ನ ಪ್ರಯಾಣದುದ್ದಕ್ಕೂ, ಸುಸ್ಥಿರತೆಯ ವಿಷಯದ ಬಗ್ಗೆ ವಯಸ್ಕರಿಗೆ ಅರಿವು ಮತ್ತು ಪ್ರೇರಣೆಯ ಕೊರತೆಯಿದೆ ಎಂಬುದನ್ನು ಅರಿತುಕೊಂಡೆ. ನಮ್ಮ ಅನುಕೂಲವು ಪರಿಸರದ ಕಾಳಜಿಯನ್ನು ಹಿಂದಿಕ್ಕಿದೆ. ಆದರೆ ಮಕ್ಕಳ ಆಲೋಚನೆಯು ಇದಕ್ಕೆ ಸಂಪೂರ್ಣವಾಗಿ ವಿರುದ್ಧವಾಗಿತ್ತು! ಮಕ್ಕಳೊಂದಿಗೆ ನಾನು ನಡೆಸಿದ ಸಂವಾದವು, ಮನೆಯಲ್ಲಿ ಪ್ರಮುಖ ಬದಲಾವಣೆಗಳನ್ನು ತರುವ ಸಾಮರ್ಥ್ಯವು ಅವರಲ್ಲಿ ಹೆಚ್ಚಾಗಿದೆ ಎಂಬುದನ್ನು ತಿಳಿಸಿತು. ಆದರೆ ದುರದೃಷ್ಟವಶಾತ್, ಯಾವುದೇ ಶಾಲೆಯು ಪಠ್ಯಕ್ರಮ ಅಥವಾ ಕಲಿಕೆಯ ಭಾಗವಾಗಿ ಇದಾವುದನ್ನೂ ಕಲಿಸುವುದಿಲ್ಲ.




ನಮ್ಮ ಮುಂದಿನ ಪೀಳಿಗೆಯಲ್ಲಿ ಭೂ-ಸ್ನೇಹಿ ಮನಸ್ಥಿತಿಯನ್ನು ಬೆಳೆಸಲು ಸಹಾಯ ಮಾಡುವುದು ನಮ್ಮ ಕೈಯಲ್ಲಿರುವ ಪ್ರಮುಖ ಕಾರ್ಯಗಳಲ್ಲಿ ಒಂದಾಗಿದೆ ಎಂದು ಅರಿತುಕೊಂಡ ನಾನು ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿರುವ ಈ ಅಂತರವನ್ನು ತುಂಬಲು ಸಹಾಯ ಮಾಡಬಹುದು ಎಂದು ಭಾವಿಸಿದೆ. ಈ ಸಂಕಲ್ಪವು ನಮಗೆ ಸಾಯಿಲ್ ಆಂಡ್ ಸೋಲ್ ನಲ್ಲಿ ತ್ಯಾಜ್ಯ ನಿರ್ವಹಣೆಯಲ್ಲಿ ಪ್ರಾಯೋಗಿಕ ಕಲಿಕಾ ಘಟಕವನ್ನು ಅಭಿವೃದ್ಧಿಪಡಿಸಲು ಅವಕಾಶವನ್ನು ನೀಡಿತು. ನಾವು ಅದನ್ನು ಶೂನ್ಯ ತ್ಯಾಜ್ಯ ಆವರಣ ಕಾರ್ಯಕ್ರಮ (ಝಡ್‌ಡಬ್ಲ್ಯೂಸಿ) ಎಂದು ಕರೆದೆವು. ಝಡ್‌ಡಬ್ಲ್ಯೂಸಿ ಎನ್ನುವುದು ಯಾವುದೇ ಶೈಕ್ಷಣಿಕ ಸಂಸ್ಥೆ, ಶಾಲೆಗಳು ಅಥವಾ ಕಾಲೇಜುಗಳಿಗೆ ಅವರ ತ್ಯಾಜ್ಯವನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಇರುವ ಒಂದು ವರ್ಷದ ಕಾರ್ಯಕ್ರಮವಾಗಿದೆ. ಝಡ್‌ಡಬ್ಲ್ಯೂಸಿ ಅನ್ನು ಎಲ್ಲ ಫಲಾನುಭವಿಗಳನ್ನು - ವಿದ್ಯಾರ್ಥಿಗಳು ಮತ್ತು ಸಿಬ್ಬಂದಿ ಸದಸ್ಯರನ್ನು- ಒಳಗೊಳ್ಳುವ ರೀತಿಯಲ್ಲಿ ವಿನ್ಯಾಸಗೊಳಿಸಲಾಗಿದೆ. ಅವರು ಉತ್ಪಾದಿಸುವ ತ್ಯಾಜ್ಯಕ್ಕೆ ಪ್ರತಿಯೊಬ್ಬರನ್ನು ಹೊಣೆಗಾರರನ್ನಾಗಿ ಮತ್ತು ಜವಾಬ್ದಾರರನ್ನಾಗಿ ಮಾಡುವುದು ಮತ್ತು ಆ ತ್ಯಾಜ್ಯವನ್ನು ನಿರ್ವಹಿಸುವುದು ಇದರ ಉದ್ದೇಶವಾಗಿದೆ. ಈ

ಕಾರ್ಯಕ್ರಮದ ಮೂಲಕ, ಸುಸ್ಥಿರ ಜೀವನಶೈಲಿಯನ್ನು ಮುನ್ನಡೆಸಲು ಸಹಾಯ ಮಾಡಲು ಮಾಲೀಕತ್ವದ ವಿಷಯದಲ್ಲಿ ವರ್ತನೆಯ ಬದಲಾವಣೆಗಳನ್ನು ತರಲು ನಾವು ಪ್ರಯತ್ನಿಸುತ್ತೇವೆ.



ಕಾರ್ಯಕ್ರಮವನ್ನು ನಾಲ್ಕು ಪ್ರಮುಖ ಘಟಕಗಳಾಗಿ ವಿಂಗಡಿಸಲಾಗಿದೆ: ಅರಿವು, ಪರೀಕ್ಷಿಸುವುದು(ಆಡಿಟ್), ನಿರ್ವಹಣೆ ಮತ್ತು ನೇರ ಅನುಭವ(ಲೈವ್), ಪ್ರಾಯೋಗಿಕ (ಹ್ಯಾಂಡ್ಸ್-ಆನ್) ಯೋಜನೆಗಳು ಮತ್ತು ಒಳಾಂಗಣ (ಇನ್-ಹೌಸ್) ಯೋಜನೆಗಳು. ಮೊದಲಿಗೆ, ನಾವು ಮಕ್ಕಳನ್ನು ಅವರ ವಯಸ್ಸಿಗನುಗುಣವಾಗಿ ಗುಂಪುಗಳಾಗಿ ವಿಂಗಡಿಸುತ್ತೇವೆ ಮತ್ತು ಸುಸ್ಥಿರತೆಯ ಬಗ್ಗೆ ಜಾಗೃತಿ ಮೂಡಿಸಲು ಅವರೊಂದಿಗೆ ಕೆಲಸ ಮಾಡುತ್ತೇವೆ. ಉದಾಹರಣೆಗೆ - ಮಾಹಿತಿಯುಕ್ತ ಮತ್ತು ಜವಾಬ್ದಾರಿಯುತ ಗ್ರಾಹಕರಾಗುವುದು ಹೇಗೆ? ವಿಶಿಷ್ಟ ಉತ್ಪನ್ನ ಜೀವನಚಕ್ರ ಎಂದರೇನು? ತ್ಯಾಜ್ಯವು ಹೇಗೆ ಉತ್ಪತ್ತಿಯಾಗುತ್ತದೆ? ಅದು ಎಲ್ಲಿ ಕೊನೆಗೊಳ್ಳುತ್ತದೆ ಮತ್ತು ಅದು ಯಾವ ಹಾನಿಯನ್ನು ಉಂಟುಮಾಡುತ್ತದೆ? ಜಾಗೃತಿ ಮಾದರಿ ಘಟಕವು ವರ್ಷವಿಡೀ ನಡೆಯುತ್ತದೆ.

ಮಕ್ಕಳು ಮೂಲಭೂತ ಅಂಶಗಳನ್ನು ಅರ್ಥಮಾಡಿಕೊಂಡ ಅನಂತರ, ನಾವು ಪರೀಕ್ಷಿಸುವ/ಆಡಿಟ್ ಅಭ್ಯಾಸವನ್ನು ಆರಂಭಿಸುತ್ತೇವೆ. ಇದು ಶಾಲೆಯು ಉತ್ಪಾದಿಸುವ ತ್ಯಾಜ್ಯದ ಪ್ರಮಾಣವನ್ನು ಮತ್ತು ಅದನ್ನು ವಿಲೇವಾರಿ ಮಾಡಲು ನಾವು ಬಳಸುವ ವಿಧಾನಗಳನ್ನು ಗುರುತಿಸುತ್ತದೆ. ಇದು ಎಷ್ಟು ತ್ಯಾಜ್ಯ ಉತ್ಪಾದನೆಯಾಗುತ್ತದೆ ಎಂದು ತಿಳಿಯಲು ನಮಗೆ ಸಹಾಯ ಮಾಡುತ್ತದೆ. ಅನಂತರ ನಾವು ಕ್ಯಾಂಪಸ್ಸಿನ ಒಳಗೆ ಮತ್ತು ಸುತ್ತಲೂ ತ್ಯಾಜ್ಯವನ್ನು ನಿರ್ವಹಿಸಲು ಒಂದು ನೀಲನಕ್ಷೆಯನ್ನು ರಚಿಸುತ್ತೇವೆ. ಕಾರ್ಯಕ್ರಮದುದ್ದಕ್ಕೂ, ತ್ಯಾಜ್ಯವನ್ನು ಕಡಮೆ ಮಾಡುವ ಮತ್ತು ಸಂಸ್ಕರಿಸುವ ವಿವಿಧ ವಿಧಾನಗಳ ಬಗ್ಗೆ ಮಕ್ಕಳಿಗೆ ಅರಿವು ಮೂಡಿಸಲಾಗುತ್ತದೆ. ಮಕ್ಕಳು ನೇರವಾಗಿ ಮಾಡಿದ ಈ

ಯೋಜನೆಗಳು ಮೆಚ್ಚುಗೆಗೆ ಪಾತ್ರವಾಗುವುದರೊಂದಿಗೆ ಕಾರ್ಯಕ್ರಮವು ಕೊನೆಗೊಳ್ಳುತ್ತದೆ. ಮಾದರಿ ಉದಾಹರಣೆಗಳೆಂದರೆ: ಗಿಡಮೂಲಿಕೆಗಳ ಉದ್ಯಾನವನ್ನು ರಚಿಸುವುದು, ಮಿಶ್ರ ಗೊಬ್ಬರ ತಯಾರಿಸುವುದು ಕಿಣ್ವ ತಯಾರಿಕೆ ಘಟಕಗಳನ್ನು ಸ್ಥಾಪಿಸುವುದು ಅಥವಾ ಶಾಲೆಗಳು ಉತ್ಪಾದಿಸುವ ಕಾಗದವನ್ನು ಮರುಬಳಕೆ ಮಾಡಲು ಸಣ್ಣ ಪ್ರಮಾಣದ ಕೈಯಿಂದ ಮಾಡುವ ಕಾಗದದ ಘಟಕವನ್ನು ಸ್ಥಾಪಿಸುವುದು.



ಪರಿಣಾಮಕಾರಿ ಕಲಿಕೆಯನ್ನುಂಟುಮಾಡಲು ನಾವು ವಿವಿಧ ರೀತಿಯ ಬೋಧನಾ ವಿಧಾನಗಳನ್ನು ಬಳಸುತ್ತೇವೆ. ಶ್ರವ್ಯ ಮತ್ತು ದೃಶ್ಯ ಬೋಧನಾ ಸಾಧನಗಳು ಮಕ್ಕಳನ್ನು ಆಕರ್ಷಿಸಲು ಸಹಾಯ ಮಾಡುತ್ತವೆ. ಬಹಳ ಉಪಯುಕ್ತವಾದ ತತ್ತ್ವವೆಂದರೆ ಆಟವಾಡಿಸುವುದು. ಗುಂಪು ಚಟುವಟಿಕೆಗಳು, ಪಾತ್ರಾಭಿನಯಗಳು, ಮೋಜು ಮತ್ತು ಆಟಗಳಿಂದ ಕೂಡಿದ ಈ ವಿಧಾನಗಳಲ್ಲಿ ಮಗು ಸಂಪೂರ್ಣವಾಗಿ ತೊಡಗಿಸಿಕೊಂಡು ಕಲಿಯುತ್ತದೆ. ನಾವು ಯೋಗ ಮತ್ತು ಪ್ರಕೃತಿಯಿಂದ ಕೂಡ ಸ್ಫೂರ್ತಿ ಪಡೆಯುತ್ತೇವೆ. ಸಂಕಲ್ಪ(ಪರಿಹರಿಸುವುದು), ಯೋಗಾಭ್ಯಾಸ, ಮರವನ್ನು ಅಪ್ಪಿಕೋ (ಹಗ್-ಎ-ಟ್ರೀ) ಮುಂತಾದವುಗಳು ಆಲೋಚನೆಗಳು ಮತ್ತು ಪರಿಕಲ್ಪನೆಗಳನ್ನು ಬಲಪಡಿಸಲು ನಮಗೆ ಸಹಾಯ ಮಾಡುತ್ತವೆ. ಸಾಯಿಲ್ ಆಂಡ್ ಸೋಲ್ ಸಂಸ್ಥೆಯು ಇಡೀ ವರ್ಷದ ಪ್ರಯಾಣವನ್ನು ದಾಖಲಿಸುತ್ತದೆ ಮತ್ತು ಮಕ್ಕಳ ವರ್ತನೆಗಳಲ್ಲಿ ಅನೇಕ ಆಸಕ್ತಿಕರ ಬದಲಾವಣೆಗಳನ್ನು ಗಮನಿಸಿದ್ದೇವೆ. ಅವುಗಳಲ್ಲಿ ಕೆಲವು ಹೀಗಿವೆ:

- ಮಕ್ಕಳು ತಮ್ಮ ಜನ್ಮದಿನದಂದು ತಮ್ಮ ಸಹಪಾಠಿಗಳೊಂದಿಗೆ ಚಾಕೊಲೇಟುಗಳ ಬದಲಿಗೆ ಮನೆಯಲ್ಲಿ ತಯಾರಿಸಿದ ಸಿಹಿತಿಂಡಿಗಳು/ತಾಜಾ ಹಣ್ಣುಗಳು/ಒಣ ಹಣ್ಣುಗಳನ್ನು ಹಂಚಿಕೊಳ್ಳುತ್ತಾರೆ.

- ಮಕ್ಕಳು ತಮ್ಮ ಪೋಷಕರು ಪ್ಲಾಸ್ಟಿಕ್ ಅನ್ನು ಸಾಧ್ಯವಾದಷ್ಟು ದೂರವಿಡಬೇಕೆಂದು ಒತ್ತಾಯಿಸುತ್ತಾರೆ- ಉದಾ. ಮನೆಯಿಂದ ಬಟ್ಟೆಯ ಚೀಲಗಳನ್ನು ಒಯ್ಯುವುದು.

- ಅಂಗಡಿಯವರೊಂದಿಗೆ ಮಾತನಾಡುವುದು ಮತ್ತು ಪ್ಲಾಸ್ಟಿಕ್ ಚೀಲಗಳು ಬೀರುವ ದುಷ್ಪರಿಣಾಮಗಳ ಬಗ್ಗೆ ಅವರಿಗೆ ಶಿಕ್ಷಣ ನೀಡುವುದು.

- ಕಡಮೆ ಸಾಮಗ್ರಿ ಕೊಂಡುಕೊಳ್ಳುವುದು: ಮಕ್ಕಳು ಪರ್ಯಾಯ ಆದ್ಯತೆಗಳನ್ನು ತೋರಿಸಿದ್ದಾರೆ.
- ಪ್ಯಾಕ್ ಮಾಡಿದ ಸರಕುಗಳನ್ನು ಖರೀದಿಸುವ ಬದಲು ತಮ್ಮಷ್ಟಕ್ಕೆ ತಾವೇ ಮಾಡುವ ವಿಧಾನಗಳನ್ನು ಒಪ್ಪಿಕೊಳ್ಳುವುದು - ಉದಾಹರಣೆಗೆ, ಮಕ್ಕಳು ಶುಚಿಗೊಳಿಸಲು ರಾಸಾಯನಿಕಗಳನ್ನು ಖರೀದಿಸುವ ಬದಲು ತಮ್ಮದೇ ಜೈವಿಕವಾದ, ಶುಚಿಗೊಳಿಸುವ ವಸ್ತುಗಳನ್ನು ಮಾಡುವ ವಿಧಾನಗಳನ್ನು ಕಲಿತರು.
- ಮೃದು ಕೌಶಲಗಳಾದ ಸಕ್ರಿಯ ಆಲಿಸುವಿಕೆ, ಗುಂಪು ಚರ್ಚೆ, ಸ್ಪಷ್ಟವಾಗಿ ವ್ಯಕ್ತಪಡಿಸುವುದು, ದೃಢತೆ, ಮಾಲೀಕತ್ವಗಳಂಥ ಗುಣಗಳನ್ನು ಗಳಿಸಿಕೊಳ್ಳುವ ಮೂಲಕ ಒಟ್ಟಾರೆ ವ್ಯಕ್ತಿತ್ವದಲ್ಲಿ ಸುಧಾರಣೆಯಾಗಿರುವುದು.

ಈ ಮೇಲೆ ಕಾಣಿಸಿದವುಗಳು ಚಿಕ್ಕ ಸುಧಾರಣೆಗಳಾಗಿ ಕಾಣಿಸಬಹುದು. ಆದರೆ ವಾಸ್ತವದಲ್ಲಿ, ಅವು ಮಗುವಿಗೆ ಅವನ/ಅವಳ ಪರಿಸರಕ್ಕೆ ಸೂಕ್ತವಾಗಿ ಸ್ಪಂದಿಸುವ ಬಗ್ಗೆ ಅರಿವನ್ನು ಮೂಡಿಸುವ ದೊಡ್ಡ ಉದ್ದೇಶವನ್ನು ಹೊಂದಿವೆ.

ಈ ಬದಲಾವಣೆಗಳನ್ನು ತರುವುದು ಸುಲಭವಾಗಿರಲಿಲ್ಲ. ನಮ್ಮ ಕಾರ್ಯಕ್ರಮದ ಪ್ರತಿ ಹಂತದಲ್ಲೂ ಪ್ರತಿಯೊಬ್ಬರಿಗೂ ಮನವರಿಕೆ ಮಾಡಿಕೊಡಬೇಕಿತ್ತು. ವಿವಿಧ ರಾಜ್ಯಗಳಾದ್ಯಂತ ಪ್ರತಿಷ್ಠಿತ ಅಂತಾರಾಷ್ಟ್ರೀಯ ಶಾಲೆಗಳು ಸೇರಿದಂತೆ ಅನೇಕ ಶಾಲೆಗಳೊಂದಿಗೆ ಸಂವಹನ ನಡೆಸಿದ ಮೇಲೆ ಅನಿಸದ್ದು, ಈ ರೀತಿಯ ಪರಿಕಲ್ಪನೆಗಳನ್ನು ಜನರಿಗೆ ಮನಮುಟ್ಟಿಸುವುದು ಸುಲಭವಲ್ಲ ಎಂದು.

ಮೊದಲಿಗೆ, ಹೆಚ್ಚಿನ ಶಾಲೆಗಳು ಪಠ್ಯಪುಸ್ತಕಗಳಲ್ಲಿಲ್ಲದ ಅನುಭವಾಧಾರಿತ ಮತ್ತು ನೈಜ ಜೀವನವನ್ನು ಆಧರಿಸಿದ ಪರಿಸರ ಶಿಕ್ಷಣದ ಆವಶ್ಯಕತೆಯಿದೆ ಎಂದು ಯೋಚಿಸುವುದಿಲ್ಲ. ಈ ಮುಖ್ಯವಾಹಿನಿಯ ಶಾಲೆಗಳು ತರಗತಿ ಬೋಧನೆಯನ್ನು ಅವಲಂಬಿಸಿವೆ ಮತ್ತು ಶೈಕ್ಷಣಿಕ ವಿಷಯಗಳ ಮೇಲೆ ಗಮನ ಕೇಂದ್ರೀಕರಿಸುತ್ತವೆ. ಆಡಳಿತ ಮಂಡಳಿಯ ಆದ್ಯತೆಗಳು, ಅರಿವಿನ ಕೊರತೆ ಮತ್ತು ಪರಿಸರ ಶಿಕ್ಷಣಕ್ಕೆ ಬದ್ಧರಾಗಿರಬೇಕಾದುದು ಅನುಭವ ಶಿಕ್ಷಣಕ್ಕೆ ಪ್ರತಿಬಂಧಕಗಳಾಗಿವೆ. ಸಹಜವಾಗಿ, ಅಂತಹ ಕಲಿಕೆಗೆ ಕೆಲವು ಸ್ವೀಕಾರವಿರುವ ಮತ್ತೊಂದು ರೀತಿಯ ಶಾಲೆಗಳು ಇವೆ. ಆದರೆ ಅವುಗಳು ಆಡಳಿತ ಮಂಡಳಿಯ ಅನುಮತಿ ಪಡೆಯಲಾಗುವುದಿಲ್ಲ ಅಥವಾ ಅವುಗಳಿಗೆ ಹಣದ ಕೊರತೆ ಕಾಡುತ್ತದೆ, ಅನೇಕ ಸರ್ಕಾರಿ ಮತ್ತು ಕೆಲವು ಖಾಸಗಿ ಶಾಲೆಗಳು ಈ ವರ್ಗಕ್ಕೆ ಸೇರುತ್ತವೆ. ಸಾಯಿಲ್ ಆಂಡ್ ಸೋಲ್ ಯಾವಾಗಲೂ ಉಚಿತ ಕಾರ್ಯಾಗಾರಗಳನ್ನು ನಡೆಸುವ ಮೂಲಕ ಅಂತಹ ಶಾಲೆಗಳಿಗೆ ಸಹಾಯ ಮಾಡಿದೆ. ಮತ್ತು ಮೂರನೇ ವರ್ಗವು ಪರ್ಯಾಯ ಶಾಲೆಗಳಾಗಿದ್ದು, ಕೆಲವು ಉಪಕ್ರಮಗಳು ಈಗಾಗಲೇ ಅಲ್ಲಿ ಜಾರಿಯಲ್ಲಿವೆ. ವಿದ್ಯಾರ್ಥಿಗಳು ಮತ್ತು ಸಿಬ್ಬಂದಿ ಪ್ರಯೋಗ ಮತ್ತು ಕಲಿಕೆಯ ಕಡೆಗೆ ಒಲವು ತೋರುತ್ತಾರೆ. ಅಂತಹ ಶಾಲೆಗಳೊಂದಿಗೆ ನಾವು ತೊಡಗಿಸಿಕೊಳ್ಳುವ ಸಾಧ್ಯತೆಗಳು ಹೆಚ್ಚು.

ಗ್ರಾಮೀಣ ಶಾಲೆಗಳು ಮತ್ತು ಅಲ್ಲಿಯ ಮಕ್ಕಳು ನಗರದವರಿಗಿಂತ ಇಂತಹ ಕಾರ್ಯಕ್ರಮಗಳಿಗೆ ಉತ್ತಮವಾಗಿ ಸ್ಪಂದಿಸುವುದನ್ನು ನಾವು ನೋಡಿದ್ದೇವೆ. ಅನೇಕ ಸರ್ಕಾರಿ ಶಾಲೆಗಳು ಪರಿಸರ, ಸಂರಕ್ಷಣೆ ಮತ್ತು ತ್ಯಾಜ್ಯದಂತಹ ವಿಷಯಗಳ ಬಗ್ಗೆ ಮಕ್ಕಳಿಗೆ ಶಿಕ್ಷಣ ನೀಡಲು ತಮ್ಮದೇ ಆದ ಸ್ವಯಂಪ್ರೇರಿತ ಕಾರ್ಯಕ್ರಮಗಳನ್ನು ನಡೆಸುತ್ತವೆ.

ಉದಾಹರಣೆಗೆ, ಸಿಕ್ಕಿಂನಲ್ಲಿ, ಮಕ್ಕಳಿಗೆ ಇದನ್ನು ಕಲಿಸಲಾಗುತ್ತದೆ ಮತ್ತು ಅಲ್ಲಿ ಹೆಚ್ಚಿನ ಅರಿವು  ಹರಡಿದೆ. ಸಾಮಾನ್ಯವಾಗಿ, ಪರಿಸರ ಶಿಕ್ಷಣದ ಬಗ್ಗೆ ಪೋಷಕರ ವರ್ತನೆ ಬದಲಾಗುತ್ತಿದೆ. ಆದರೆ ಅವರು ಇದರ ಬಗ್ಗೆ ಮೂಲಭೂತ ಶಿಕ್ಷಣವನ್ನು ಒದಗಿಸಲು ಶಾಲೆಗಳತ್ತ ನೋಡುತ್ತಾರೆ.

ನಮ್ಮ ಕಾರ್ಯಕ್ರಮದೊಂದಿಗೆ ಜೊತೆಯಾಗಲು  ಶಾಲೆಯು ಒಪ್ಪಿಕೊಂಡರೆ ವ್ಯವಹಾರವು  ಸುಲಭವಾಗುತ್ತದೆ. ನಮ್ಮ ಪ್ರಾಮಾಣಿಕ ಉದ್ದೇಶಗಳು  ನಮ್ಮ ಬಗ್ಗೆ ಮಾತನಾಡುತ್ತವೆ ಎಂದು ನಾವು  ನಂಬುತ್ತೇವೆ. ಮಕ್ಕಳು ಸ್ಪಂಜುಗಳಂತೆ, ಅವರು ಏನನ್ನೇ ಆದರೂ ಹೀರಿಕೊಳ್ಳುವ ಸಾಮರ್ಥ್ಯವನ್ನು ಹೊಂದಿದ್ದಾರೆ ಎಂದು ನಾನು ಆಗಾಗ್ಗೆ ಹೇಳುತ್ತೇನೆ - ಇದು ನಮ್ಮ ಆಲೋಚನೆಗಳನ್ನು ನಾವೆಷ್ಟು  ಪರಿಣಾಮಕಾರಿಯಾಗಿ ಅವರಿಗೆ ತಿಳಿಸುತ್ತೇವೆ ಎಂಬುದರ ಮೇಲೆ ಅವಲಂಬಿತವಾಗಿರುತ್ತದೆ. ನನ್ನ ಅಭಿಪ್ರಾಯದಲ್ಲಿ, ಮಕ್ಕಳೇ ಬದಲಾವಣೆಯ ಹರಿಕಾರರು! ಯುರೋಪ್, ಯುಎಸ್ ಮತ್ತು ಆಸ್ಟ್ರೇಲಿಯದಾದ್ಯಂತ ಅಲೆಗಳನ್ನೆಬ್ಬಿಸುತ್ತಿರುವ  ಹವಾಮಾನ ಬದಲಾವಣೆಯ ಕಾರ್ಯಕರ್ತೆ ಹದಿಹರೆಯದ  ಗ್ರೇಟಾ ಥನ್ಬರ್ಗ್ ಇದಕ್ಕೆ ಉದಾಹರಣೆ. ಸಾವಿರಾರು ಮಕ್ಕಳೊಂದಿಗೆ, ಜಾಗತಿಕ ತಾಪಮಾನ ಏರಿಕೆಯನ್ನು ಕುರಿತು ವೇಗವಾಗಿ ಕಾರ್ಯನಿರ್ವಹಿಸಲು ನೀತಿನಿರೂಪಕರನ್ನು ಒತ್ತಾಯಿಸುತ್ತಿದ್ದಾಳೆ. ಭಾರತವೂ ತಡವಾಗುವ ಮುನ್ನ ಕ್ರಮ ಕೈಗೊಳ್ಳಬೇಕಿದೆ. ನಮ್ಮ ಯುವ ಪೀಳಿಗೆಯು ಯಥಾಸ್ಥಿತಿಯನ್ನು ಪ್ರಶ್ನಿಸಲು ಮತ್ತು ಪರಿಸರದ ಉಸ್ತುವಾರಿಯ ವಿಷಯದಲ್ಲಿ ದೇಶವನ್ನು ಮುಂದಕ್ಕೆ ಕೊಂಡೊಯ್ಯಲು ಕೊಡುಗೆ ನೀಡುವ ಅಗತ್ಯವಿದೆ.

ಭಾರತದಲ್ಲಿ ತ್ಯಾಜ್ಯ ನಿರ್ವಹಣೆಯನ್ನು ಗಮನಿಸಿದಾಗ, ನಾನು ಅನೇಕ ಸಮಸ್ಯೆಗಳನ್ನು ಕಾಣುತ್ತೇನೆ. ಮೊದಲನೆಯದಾಗಿ, 'ನನ್ನ ತ್ಯಾಜ್ಯ, ನನ್ನ ಜವಾಬ್ದಾರಿ ಅಲ್ಲ' ಎಂಬ ವರ್ತನೆ. ಇದು ಬದಲಾಗಬೇಕಿದೆ. ನಾವು ಉತ್ಪಾದಿಸುವ ತ್ಯಾಜ್ಯಕ್ಕೆ ನಾವೇ ಜವಾಬ್ದಾರರು. ಇಂದು, ನಮ್ಮ ಸಾಗರಗಳಿಗೆ ಹುಚ್ಚುಚ್ಚಾಗಿ ಪ್ಲಾಸ್ಟಿಕ್ ಅನ್ನು ಸುರಿಯಲಾಗುತ್ತಿದೆ. ನಮ್ಮ ನದಿಗಳು, ಸರೋವರಗಳು ಮತ್ತು ಜಲಮೂಲಗಳು ಕಲುಷಿತವಾಗಿವೆ. ಬೆಳೆಯುತ್ತಿರುವ ಶ್ರೀಮಂತಿಕೆಯು ಹುಚ್ಚು ಹಿಡಿಸುವ ಗ್ರಾಹಕೀಕರಣಕ್ಕೆ ಕಾರಣವಾಗುತ್ತಿದೆ. ಇದರ ಪರಿಣಾಮವಾಗಿ, ನಮ್ಮ ಸುತ್ತಲೂ ಅನಗತ್ಯ ತ್ಯಾಜ್ಯವನ್ನು ಸೃಷ್ಟಿಸುತ್ತಿದೆ. ಪರ್ವತಗಳು, ಮರುಭೂಮಿಗಳು, ಕಾಡುಗಳನ್ನೂ  ಸಹ ಬಿಡುತಿಲ್ಲ. ಜಾಗತಿಕ ಹವಾಮಾನ ಬದಲಾವಣೆಯು ವಾಸ್ತವವಾಗಿದೆ. ಪ್ರತಿಯೊಬ್ಬರೂ ಇಂಗಾಲ ಮುಕ್ತ ಜೀವನಶೈಲಿಯನ್ನು ಮುನ್ನಡೆಸುವುದು ಪ್ರಾಯೋಗಿಕವಾಗಿಲ್ಲದಿದ್ದರೂ, ತ್ಯಾಜ್ಯ ಮತ್ತು ಪರಿಸರವು ಪ್ರತಿಯೊಬ್ಬರ ಕಾಳಜಿಯಾಗಿರಬೇಕು. ನಾವು ಟಿಕ್ ಟಿಕ್ ಎನ್ನುತ್ತಿರುವ ಟೈಂ ಬಾಂಬ್ ಮೇಲೆ ಕುಳಿತಿದ್ದೇವೆ. ಅರಿವು, ಕಾಲಬದ್ಧ ಮತ್ತು ವಿಶ್ವಾಸಾರ್ಹ ದೊಡ್ಡ ಪ್ರಮಾಣದ ಕ್ರಮಗಳು ಮಾತ್ರ ನಮ್ಮ ದೇಶ ಮತ್ತು ಜಗತ್ತನ್ನು ಉಳಿಸಬಹುದು.

ತ್ಯಾಜ್ಯ ನಿರ್ವಹಣೆಯ ಜೊತೆಗೆ, ಸಾಯಿಲ್ ಆಂಡ್ ಸೋಲ್ ಆಹಾರ, ಶಕ್ತಿ ಮತ್ತು ನೀರನ್ನು ಕೇಂದ್ರವಾಗಿಟ್ಟುಕೊಂಡಿರುವ  ಕಾರ್ಯಕ್ರಮಗಳನ್ನು ಹೊಂದಿದೆ. ನೇರ/ಮುಖಾಮುಖಿ ಯೋಜನೆಗಳು ಸಂಸ್ಥೆಯಿಂದ ಸಂಸ್ಥೆಗೆ ಅವರು ಏನು ಮಾಡಲು ಆಯ್ಕೆ ಮಾಡಿಕೊಳ್ಳುತ್ತಾರೆ ಎಂಬುದರ ಆಧಾರದ ಮೇಲೆ ಬದಲಾಗುತ್ತವೆ. ಉದಾಹರಣೆಗೆ, ಕೆಲವನ್ನು ಹೆಸರಿಸುವುದಾದಲ್ಲಿ ನಿಮ್ಮ ಆಹಾರವನ್ನು ನೀವೇ ಬೆಳೆದುಕೊಳ್ಳಿ, ಶಾಲೆಯನ್ನು ನವೀಕರಿಸಬಹುದಾದ ಶಕ್ತಿಯ ಮೂಲ ಅಥವಾ ನೀರಿನ ನಿರ್ವಹಣಾ ವ್ಯವಸ್ಥೆಯಾಗಿ ಪರಿವರ್ತಿಸುವುದು. ನಾವು

ಅವರ ಆಲೋಚನೆಗಳನ್ನು ಮುಕ್ತವಾಗಿ ಸ್ವಾಗತಿಸುತ್ತೇವೆ ಮತ್ತು ಅವರ ಆವಶ್ಯಕತೆಗೆ ಅನುಗುಣವಾಗಿ ನಮ್ಮ ಕಾರ್ಯಕ್ರಮವನ್ನು ರೂಪಿಸುತ್ತೇವೆ. ಪ್ರತಿಯೊಂದು ಕಾರ್ಯಕ್ರಮವು ಖಂಡಿತವಾಗಿಯೂ ಅವರ ಅನುಭವಗಳನ್ನು ಉತ್ಕೃಷ್ಟಗೊಳಿಸುತ್ತದೆ ಮತ್ತು ಕಲಿಕೆಯು ಅವರ ಜೀವನಕ್ಕಾಗಿಯೇ ಇದೆ.

ಸಾಯಿಲ್ ಆಂಡ್ ಸೋಲ್‌ನಲ್ಲಿ ಕೇವಲ ಸಮಸ್ಯೆಗಳ ಮೇಲೆ ಕೇಂದ್ರೀಕರಿಸುವ ಬದಲು, ದೈನಂದಿನ ಸವಾಲುಗಳನ್ನು ಎದುರಿಸಬಹುದಾದ ಸರಳ ಪರಿಹಾರಗಳನ್ನು ನಾವು ಕಂಡುಕೊಳ್ಳಲು ಪ್ರಯತ್ನಿಸುತ್ತೇವೆ. ಈ ಉತ್ಪನ್ನಗಳು ಸಂಪೂರ್ಣವಾಗಿ ನೈಸರ್ಗಿಕ, ಕೈಯಿಂದ ಮಾಡಿದವು ಮತ್ತು ಸುಸ್ಥಿರವಾಗಿವೆ. ಈ ಉತ್ಪನ್ನಗಳ ಮಾರಾಟದ ಮೂಲಕ ಗಳಿಸಿದ ಹಣವು ಸಮಾಜದಲ್ಲಿ ಸಕಾರಾತ್ಮಕ ಬದಲಾವಣೆಯನ್ನು ತರಲು ರಾಷ್ಟ್ರದಾದ್ಯಂತ ವಿವಿಧ ಸಮುದಾಯಗಳೊಂದಿಗೆ ತೊಡಗಿಸಿಕೊಳ್ಳುವ ನಮ್ಮ ಪ್ರಯತ್ನಗಳನ್ನು ಪೋಷಿಸುತ್ತದೆ.

ಶಿಕ್ಷಣದ ಕ್ಷೇತ್ರದಲ್ಲಿ ಕೆಲಸ ಮಾಡಿದ ಅನಂತರ, ನಾನು ತೃಪ್ತಿ ಹೊಂದಿದ್ದರೂ, ಸಾಧ್ಯವಾದಷ್ಟು ಮಕ್ಕಳು ಮತ್ತು ಸಮುದಾಯಗಳನ್ನು ತಲಪುವ ನನ್ನ ಗುರುತರ ಜವಾಬ್ದಾರಿಯನ್ನು ನೆನಪಿಸಿಕೊಳ್ಳುತ್ತೇನೆ. ಮುಂದೊಂದು ದಿನ ಮಕ್ಕಳಿಗೆ ಪರಿಸರ ನಾಯಕತ್ವದ ಅವಕಾಶ ಕಲ್ಪಿಸುವ ಕ್ಯಾಂಪಸ್ ಅನ್ನು ನಿರ್ಮಿಸುವುದು ನನ್ನ ಕನಸಾಗಿದೆ.

ಯಾರಿಗೆ ಗೊತ್ತು, ಆ ದಿನ ತುಂಬ ದೂರವಿರಲಾರದು...!

***

**ಪ್ರೀತಿ ರಾವ್:** ಇವರು ಬೆಂಗಳೂರು ಮೂಲದ ಪರಿಸರ ಉದ್ಯಮಿ. ಸುಸ್ಥಿರತೆಯ ಬಗ್ಗೆ ಜಾಗೃತಿ ಮೂಡಿಸುವ ಸಾಯಿಲ್ ಆಂಡ್ ಸೋಲ್ ಸಂಸ್ಥಾಪಕರಾಗಿದ್ದಾರೆ. ಪ್ರೀತಿ ಒಬ್ಬ ಕಲಿಕಾರ್ಥಿ, ಸುಸ್ಥಿರತೆಯ ಅನುಯಾಯಿ, ಯೋಗ ಶಿಕ್ಷಕಿ ಮತ್ತು ಕರಾಟೆಯಲ್ಲಿ ಕಪ್ಪು ಬೆಲ್ಟ್ ಅನ್ನು ಹೊಂದಿದ್ದಾರೆ. ಪ್ರೀತಿ ಪ್ರವಾಸ ಮತ್ತು ಬೋಧಿಸುವುದನ್ನು ಇಷ್ಟಪಡುತ್ತಾರೆ. ಅವರನ್ನು priti@soilandsoul.in ಮೂಲಕ ಸಂಪರ್ಕಿಸಬಹುದು.